# ಶ್ರೀಕೃಷ್ಣಜನ್ಮಾಷ್ಟಮೀ ವ್ರತ

(ಶ್ರಾವಣ ಕೃ. ೮)



ಈಶ್ವರ ಉವಾಚ -

ಕೃಷ್ಣಾಷ್ಟಮ್ಯಾಂ ನಭೋಮಾಸಿ ವೃಷೇ ಚಂದ್ರೇ ನಿಶೀಥಕೇ ।
ದೇವಕ್ಯಜೀಜನತ್ ಕೃಷ್ಣಂ ಯೋಗೇಽಸ್ಮಿನ್ವಸುದೇವತಃ ॥ ೧॥

ಸಿಂಹರಾಶಿಗತೇ ಸೂರ್ಯೇ ಕರ್ತವ್ಯಃ ಸುಮಹೋತ್ಸವಃ ।
ಸಪ್ತಮ್ಯಾಂ ಲಘುಭುಕ್ಕುರ್ಯಾದ್ದಂತಧಾವನಪೂರ್ವಕಮ್ ॥ ೨॥

ಉಪವಾಸಸ್ಯ ನಿಯಮಂ ಸ್ವಪೇದ್ರಾತ್ರೌ ಜಿತೇಂದ್ರಿಯಃ ।
ಕೇವಲೇನೋಪವಾಸೇನ ಕೃಷ್ಣಜನ್ಮದಿನಂ ನಯೇತ್ ॥ ೩॥

ಸಪ್ತಜನ್ಮಕೃತಾತ್ಪಾಪಾನ್ಮುಚ್ಯತೇ ನಾತ್ರ ಸಂಶಯಃ ।
ಉಪಾವೃತಸ್ತು ಪಾಪೇಭ್ಯೋ ಯಸ್ತು ವಾಸೋ ಗುಣೈಃ ಸಹ ॥ ೪॥

ಉಪವಾಸಃ ಸ ವಿಜ್ಞೇಯಃ ಸರ್ವಭೋಗವಿವರ್ಜಿತಃ ।
ತತೋಽಷ್ಟಮ್ಯಾಂ ತಿಲೈಃ ಸ್ನಾತ್ವಾ ನದ್ಯಾದೌ ವಿಮಲೇ ಜಲೇ ॥ ೫॥

---

ಈಶ್ವರನು ಹೇಳುತ್ತಾನೆ - ಶ್ರಾವಣ ಮಾಸದ ಕೃಷ್ಣಪಕ್ಷದ ಅಷ್ಟಮೀ ತಿಥಿಯಂದು ಮಧ್ಯರಾತ್ರಿಯಲ್ಲಿ ವಸುದೇವನ ಪತ್ನಿಯಾದ ದೇವಕಿಯು ಶ್ರೀಕೃಷ್ಣನಿಗೆ ಜನ್ಮವಿತ್ತಳು. ॥ ೧॥ ಸೂರ್ಯನು ಸಿಂಹರಾಶಿಯಲ್ಲಿರುವಾಗ ಜನ್ಮೋತ್ಸವವನ್ನು ವೈಭವದಿಂದ ಆಚರಿಸಬೇಕು. ಸಪ್ತಮಿಯ ದಿನ ಅಲ್ಪಭೋಜನವನ್ನು ಮಾಡಿ ದಂತಧಾವನ ಪೂರ್ವಕ ॥ ೨॥ ಉಪವಾಸ ನಿಯಮವನ್ನು ಪಾಲಿಸಬೇಕು. ರಾತ್ರಿಯಲ್ಲಿ ಜಿತೇಂದ್ರಿಯನಾಗಿ ಮಲಗಿಕೊಳ್ಳಬೇಕು. ಕೃಷ್ಣಾಷ್ಟಮಿಯ ದಿನವನ್ನು ಸಂಪೂರ್ಣ ಉಪವಾಸದಿಂದಲೇ ಕಳೆಯಬೇಕು. ॥ ೩॥ ಇದರಿಂದ ಸಪ್ತಜನ್ಮಗಳಲ್ಲಿ ಮಾಡಿದ ಪಾಪಗಳಿಂದ ಮುಕ್ತಿಯಾಗುವದು. ಪಾಪಗಳಿಂದ ಮುಕ್ತಿಯಾಗಿ ಗುಣಗಳೊಂದಿಗೆ ವಾಸವೇನಿದೆಯೋ ॥ ೪॥ ಸರ್ವಭೋಗವರ್ಜಿತವಾದ ಆ ವಾಸವೇ ಉಪವಾಸವೆಂದು ತಿಳಿಯಲ್ಪಡುವದು. ಅಷ್ಟಮಿಯ ದಿನ ಪ್ರಾತಃಕಾಲ ನದೀ ಮೊದಲಾದ ಜಲಾಶಯಗಳಲ್ಲಿಯ ಶುದ್ಧವಾದ

ಸುದೇಶೇ ಶೋಭನಂ ಕುರ್ಯಾದ್ದೇವಕ್ಯಾಃ ಸೂತಿಕಾಗೃಹಮ್ ।
ನಾನಾವರ್ಣೈಃ ಸುವಾಸೋಭಿಃ ಶೋಭಿತಂ ಕಲಶೈಃ ಫಲೈಃ ॥ ೬॥

ಪುಷ್ಪೈರ್ದೀಪಾವಲೀಭಿಶ್ಚ ಚಂದನಾಗರುಧೂಪಿತಮ್ ।
ಹರಿವಂಶಸ್ಯ ಚರಿತಂ ಗೋಕುಲಂ ತತ್ರ ಲೇಖಯೇತ್ ॥ ೭॥

ಯುಕ್ತಂ ವಾದಿತ್ರನಿನದೈರ್ನೃತ್ಯಗೀತಾದಿಮಂಗಲೈಃ ।
ಷಷ್ಠ್ಯಾ ದೇವ್ಯಾಧಿಷ್ಠಿತಾಂ ಚ ತನ್ಮಧ್ಯೇ ಪ್ರತಿಮಾಂ ಹರೇಃ ॥ ೮॥

ಕಾಂಚನೀಂ ರಾಜತೀಂ ತಾಮ್ರೀಂ ಪೈತ್ತಲೀಂ ಮೃನ್ಮಯೀಂ ತು ವಾ ।
ವಾರ್ಕ್ಷೀಂ ಮಣಿಮಯೀಂ ವಾಪಿ ವರ್ಣಕೈರ್ಲಿಖಿತಾಂ ಯಥಾ ॥ ೯॥

ಸರ್ವಲಕ್ಷಣಸಂಪನ್ನಾಂ ಪರ್ಯಂಕೇ ಚಾಷ್ಟಶಲ್ಯಕೇ ।
ಪ್ರಸೂತಾಂ ದೇವಕೀಂ ತತ್ರ ಸ್ಥಾಪಯೇನ್ಮಂಚಕೋಪರಿ ॥ ೧೦॥

ಸುಪ್ತಂ ಬಾಲಂ ತತ್ರ ಹರಿಂ ಪರ್ಯಂಕೇ ಸ್ತನಪಾಯಿನಮ್ ।
ಯಶೋದಾಂ ತತ್ರ ಚೈಕಸ್ಮಿನ್ಪ್ರದೇಶೇ ಸೂತಿಕಾಗೃಹೇ ॥ ೧೧॥

---

ಜಲದಲ್ಲಿ ತಿಲಸ್ನಾನ ಮಾಡಿ ॥ ೫॥ ಶುದ್ಧವಾದ ಒಂದು ಸ್ಥಳದಲ್ಲಿ ದೇವಕೀ ದೇವಿಯ ಸಲುವಾಗಿ ಒಂದು ಸುಂದರವಾದ ಹೆರಿಗೆ ಮನೆಯನ್ನು ಮಾಡಬೇಕು. ಆ ಖೋಲಿಯನ್ನು ನಾನಾ ಬಣ್ಣಗಳ ವಸ್ತ್ರಗಳಿಂದಲೂ, ಕಲಶಗಳು, ಫಲಗಳು ॥ ೬॥ ಪುಷ್ಪಗಳು ಮತ್ತು ದೀಪಾವಲಿಗಳಿಂದಲೂ ಅಲಂಕರಿಸಿಚಂದನ ಅಗರು, ಧೂಪಗಳಿಂದ ಸುವಾಸಿತವಾಗುವಂತೆ ಮಾಡಬೇಕು. ಹರಿವಂಶದ ಚರಿತ್ರೆಯನ್ನು ಬರೆದು ಮನೆಯಲ್ಲಿ ಗೋಕುಲವನ್ನು ನಿರ್ಮಿಸಬೇಕು. ॥೭॥ ವಾದ್ಯಗಳನ್ನು ಮೊಳಗಿಸಿ, ನೃತ್ಯ ಗೀತಾದಿ ಮಂಗಲ ಕಾರ್ಯಗಳನ್ನು ನಡೆಸಬೇಕು. ಅಥವಾ ಗೋಕುಲದಲ್ಲಿ ವಾದನಕಾರರು, ನರ್ತಕರು, ಸಂಗೀತಕಾರರು ಮೊದಲಾದವರನ್ನು ನಿರ್ಮಿಸಬೇಕು. ಗೋಕುಲದ ಮಧ್ಯದಲ್ಲಿ ಷಷ್ಠೀದೇವಿಯೊಂದಿಗೆ ಶ್ರೀಕೃಷ್ಣನ ಪ್ರತಿಮೆಯನ್ನು ಇಡಬೇಕು. ॥ ೮॥ ಆ ಪ್ರತಿಮೆಯನ್ನು ಬಂಗಾರದಿಂದಾಗಲೀ, ಬೆಳ್ಳಿಯಿಂದಾಗಲೀ, ತಾಮ್ರದಿಂದಾಗಲೀ, ಹಿತ್ತಾಳಿಯಿಂದಾಗಲೀ, ಮೃತ್ತಿಕೆಯಿಂದಾಗಲೀ ಅಥವಾ ಕಟ್ಟಿಗೆಯಿಂದಾಗಲೀ ಮಾಡಿದ್ದು ಆಗಿರಬೇಕು. ಅಥವಾ ನಾನಾ ವರ್ಣದ ರಂಗವಲ್ಲಿಯಿಂದಾಗಲೀ ಬರೆದದ್ದು ಆಗಿರಬೇಕು. ॥೯॥ ಅಷ್ಟಶಲ್ಯೆಗಳನ್ನು ತೂಗುಬಿಟ್ಟಿರುವ ಮಂಚದ ಮೇಲೆ, ಬಾಣಂತಿಯಾದ ದೇವಕಿಯ ಸರ್ವ ಲಕ್ಷಣ ಸಂಪನ್ನವಾದ ಪ್ರತಿಮೆಯನ್ನು ಇಡಬೇಕು. ॥ ೧೦॥ ಮಂಚದ ಮೇಲೆ ತಾಯಿಯ ಸ್ತನಪಾನ ಮಾಡುತ್ತ ಮಲಗಿರುವ ಮಗು ಶ್ರೀಕೃಷ್ಣನ ಪ್ರತಿಮೆಯನ್ನು ಇಟ್ಟು,

ಪ್ರಸೂತಾಂ ಕನ್ಯಕಾಂ ಚೈವ ಕೃಷ್ಣಪಾರ್ಶ್ವೇ ತು ಸಂಲಿಖೇತ್ ।
ಕೃತಾಂಜಲಿಪುಟಾನ್ದೇವಾನ್ಯಕ್ಷವಿದ್ಯಾಧರಾಮರಾನ್ ॥ ೧೨॥

ವಸುದೇವಂ ಚ ತತ್ರೈವ ಖಡ್ಗಚರ್ಮಧರಂ ಸ್ಥಿತಮ್ ।
ಕಶ್ಯಪೋ ವಸುದೇವೋಽಯಮದಿತಿಶ್ಚೈವ ದೇವಕೀ ॥ ೧೩॥

ಶೇಷೋ ಬಲೀ ಯಶೋದಾಪಿ ಆದಿತ್ಯಾಂಶಾದ್ಬಭೂವ ಹ ।
ನಂದಃ ಪ್ರಜಾಪತಿರ್ದಕ್ಷೋ ಗರ್ಗಶ್ಚಾಪಿ ಚತುರ್ಮುಖಃ ॥ ೧೪॥

ಗೋಪ್ಯಶ್ಚಾಪ್ಸರಸಃ ಸರ್ವಾ ಗೋಪಾಶ್ಚಾಪಿ ದಿವೌಕಸಃ ।
ಕಾಲನೇಮಿಶ್ಚ ಕಂಸೋಽಯಂ ನಿಯುಕ್ತಾಸ್ತೇನ ಚಾಸುರಾಃ ॥ ೧೫॥

ಗೋಧೇನುಕುಂಜರಾಶ್ವಾಶ್ಚ ದಾನವಾಃ ಶಸ್ತ್ರಪಾಣಯಃ ।
ಲೇಖನೀಯಾಶ್ಚ ತತ್ರೈವ ಕಾಲಿಯೋ ಯಮುನಾಹೃದೇ ॥ ೧೬॥

ಇತ್ಯೇವಮಾದಿ ಯತ್ಕಿಂಚಿಚ್ಚರಿತಂ ಹರಿಣಾ ಕೃತಮ್ ।
ಲೇಖಯಿತ್ವಾ ಪ್ರಯತ್ನೇನ ಪೂಜಯೇದ್ಭಕ್ತಿತತ್ಪರಃ ॥ ೧೭॥

---

ಸೂತಿಕಾಗೃಹದ ಒಂದು ಸ್ಥಳದಲ್ಲಿ ಯಶೋದಾ ದೇವಿಯ ಪ್ರತಿಮೆಯನ್ನು ಮಾಡಿ ಇಡಬೇಕು. ॥೧೧॥ ಬಾಣಂತೀ ದೇವಕಿಯನ್ನು ಕೃಷ್ಣನ ಬದಿಗಿರುವಂತೆ ಬರೆಯಬೇಕು. ಗೋಕುಲದಲ್ಲಿ ಕೈಮುಗಿದುಕೊಂಡು ನಿಂತಿರುವ ದೇವತೆಗಳು, ಯಕ್ಷರು, ವಿದ್ಯಾಧರರು ಮುಂತಾದವರ ಪ್ರತಿಮೆಗಳನ್ನು ॥ ೧೨॥ ಮತ್ತು ಖಡ್ಗಚರ್ಮವನ್ನು ಧರಿಸಿ ನಿಂತಿರುವ ವಸುದೇವನ ಪ್ರತಿಮೆಯನ್ನು ಮಾಡಿ ಇಟ್ಟಿರಬೇಕು. ಕಶ್ಯಪಋಷಿಯೇ ವಸುದೇವನು, ಅದಿತಿಯೇ ದೇವಕಿಯು, ॥ ೧೩॥ ಶೇಷನೇ ಬಲಿ, ಎಂದು ಅನುಸಂಧಾನ ಮಾಡಿಕೊಳ್ಳಬೇಕು. ಅದಿತಿಯ ಅಂಶದಿಂದ ಹುಟ್ಟಿದವಳು ಯಶೋದೆ ಎಂದೂ, ದಕ್ಷಪ್ರಜಾಪತಿಯೇ ನಂದನೆಂದೂ, ಚತುರ್ಮುಖ ಬ್ರಹ್ಮನೇ ಗರ್ಗನೆಂದೂ ತಿಳಿಯಬೇಕು. ॥೧೪॥ ಅಪ್ಸರಾ ಸ್ತ್ರೀಯರೇ ಗೋಪಿಗಳಾಗಿರುವರೆಂದೂ, ದೇವತೆಗಳು ಗೋಪಾಲಕರಾಗಿರುವರೆಂದೂ ತಿಳಿಯಬೇಕು. ಇನ್ನು ಕಾಲನೇಮಿದೈತ್ಯನೇ ಕಂಸನಾಗಿರುವನು ಮತ್ತು ಅವನಿಂದ ನಿಯುಕ್ತರಾದವರು ಅಸುರರು. ॥೧೫॥ ವೃಷಾಸುರ, ಧೇನುಕಾಸುರ, ಕುವಲಯಾಪೀಡ, ಕೇಶಿ ಮೊದಲಾದ ಶಸ್ತ್ರಧಾರಿ ದಾನವರು ಅಸುರರು. ಇವರನ್ನೆಲ್ಲ ಗೋಕುಲದಲ್ಲಿ ಚಿತ್ರಿಸಿ ಯಮುನಾ ಮಡುವಿನಲ್ಲಿ ಕಾಲಿಯ ಸರ್ಪವನ್ನು ಚಿತ್ರಿಸಬೇಕು. ॥ ೧೬॥ ಹರಿಯಿಂದ ಮಾಡಲ್ಪಟ್ಟ ಕಾಲಿಯಮರ್ದನ ಮೊದಲಾದ ವ್ಯಾಪಾರಗಳನ್ನು ಪ್ರಯತ್ನಮಾಡಿ ಗೋಕುಲದಲ್ಲಿ ಚಿತ್ರಿಸಿ ಭಕ್ತಿಯಿಂದ ಶ್ರೀಕೃಷ್ಣನನ್ನು

ಉಪಚಾರೈಃ ಷೋಡಶಭಿರ್ದೇವಕೀ ಚೇತಿ ಮಂತ್ರತಃ ॥ ೧೮॥

ಗಾಯದ್ಭಿಃ ಕಿನ್ನರಾದ್ಯೈಃ ಸತತಪರಿಣತಾ ವೇಣುವೀಣಾನಿನಾದ್ಯೈ-
ರ್ಭೃಂಗಾರ್ಯಾದರ್ಶದೂರ್ವಾದಧಿಕಲಶಕರೈಃ ಕಿನ್ನರೈಃ ಸೇವ್ಯಮಾನಾ ।
ಪರ್ಯಂಕೇ ಸ್ವಾಸನಸ್ಥಾ ಮುದಿತತರಮುಖೀ ಪುತ್ರಿಣೀ ಸಮ್ಯಗಾಸ್ತೇ
ಸಾ ದೇವೀ ದಿವ್ಯಮಾತಾ ವಿಜಯಸುತಸುತಾ ದೇವಕೀ ಕಾಂತಯುಕ್ತಾ ॥ ೧೯॥

ಪ್ರಣವಾದಿನಮೋಽಂತೈಶ್ಚ ಪೃಥಂಗ್ನಾಮಾನುಕೀರ್ತನೈಃ ।
ಕುರ್ಯಾತ್ಪೂಜಾಂ ವಿಧಿಜ್ಞಸ್ತು ಸರ್ವಪಾಪಾಪನುತ್ತಯೇ ॥ ೨೦॥

ದೇವಕ್ಯಾ ವಸುದೇವಸ್ಯ ವಾಸುದೇವಸ್ಯ ಚೈವ ಹಿ ।
ಬಲದೇವಸ್ಯ ನಂದಸ್ಯ ಯಶೋದಾಯಾಃ ಪೃಥಕ್ ಪೃಥಕ್ ॥ ೨೧॥

ಚಂದ್ರೋದಯೇ ಶಶಾಂಕಾಯ ಅರ್ಘ್ಯಂ ದದ್ಯಾದ್ಧರಿಂ ಸ್ಮರನ್ ।
ಕ್ಷೀರೋದಾರ್ಣವಸಂಭೂತ ಅತ್ರಿಗೋತ್ರ ಸಮುದ್ಭವ ।
ನಮಸ್ತೇ ರೋಹಿಣೀಕಾಂತ ಅರ್ಘ್ಯಂ ನಃ ಪ್ರತಿಗೃಹ್ಯತಾಮ್ ॥ ೨೨॥

---

ಪೂಜಿಸಬೇಕು. ॥೧೭॥ 'ಗಾಯದ್ಭಿಃ---- ದೇವಕೀ ಕಾಂತಯುಕ್ತಾ' ಎಂದು ಮುಂದಿನ ಶ್ಲೋಕದಲ್ಲಿ ಹೇಳಿದ ಮಂತ್ರವನ್ನು ಪಠಿಸುತ್ತ ಷೋಡಶೋಪಚಾರಗಳಿಂದ ದೇವಕೀ ದೇವಿಯನ್ನು ಪೂಜಿಸಬೇಕು. ॥ ೧೮॥ ಗಾಯನ ಮಾಡುತ್ತಿರುವ ಕಿನ್ನರರಿಂದ ಸದಾ ಸುತ್ತುವರಿಯಲ್ಪಟ್ಟ, ವೇಣು ವೀಣಾದಿಗಳನ್ನು ಬಾರಿಸುತ್ತಿರುವ ಮತ್ತು ಭೃಂಗಾರ, ದರ್ಪಣ, ದೂರ್ವಾ, ದಧಿಕಲಶ ಇವುಗಳನ್ನು ಧರಿಸಿರುವ, ಕಿನ್ನರರಿಂದ ಸದಾ ಸೇವಿಸಲ್ಪಡುತ್ತಿರುವ, ಮಂಚದ ಮೇಲೆ ತನ್ನ ಹಾಸಿಗೆಯಲ್ಲಿ ಮಲಗಿರುವ, ಮುದದಿಂದ ವಿಕಸಿತವಾದ ಮುಖವುಳ್ಳ, ಮಗ್ಗುಲಲ್ಲಿ ಪುತ್ರನನ್ನು ಮಲಗಿಸಿಕೊಂಡಿರುವ, ವಿಜಯಸುತ ಶ್ರೀಹರಿಯನ್ನು ಮಗನಾಗಿ ಪಡೆದಿರುವ ಕಾಂತಿಯುಕ್ತಳಾದ ದಿವ್ಯಮಾತಾ ದೇವಕೀ ದೇವಿಯು ಸುಖವಾಗಿ ಮಲಗಿರುವಳು. ॥ ೧೯॥ ಓಂಕಾರದಿಂದ ಪ್ರಾರಂಭಿಸಿ ನಮಃ ಎಂದು ಕೊನೆಯಲ್ಲಿ ಹೇಳುತ್ತ ವಸುದೇವ - ದೇವಕಿಯರ, ಶ್ರೀಕೃಷ್ಣನ ಮತ್ತು ಬಲದೇವನ, ನಂದಯಶೋದೆಯರ ಒಂದೊಂದೇ ಹೆಸರನ್ನು ಪ್ರತ್ಯೇಕ ಪ್ರತ್ಯೇಕವಾಗಿ ಹೇಳುತ್ತ ಪೂಜಿಸಬೇಕು. ವಿಧಿ ಬಲ್ಲವನು ತನ್ನ ಪಾಪಪರಿಹಾರಕ್ಕಾಗಿ ಪ್ರತಿಯೊಬ್ಬರ ಪೂಜೆಯನ್ನು ಪ್ರತ್ಯೇಕವಾಗಿ ಮಾಡಬೇಕು. ॥ ೨೦॥ ೨೧॥ ಚಂದ್ರೋದಯವಾಗಲು ಶ್ರೀಹರಿಯನ್ನು ಸ್ಮರಿಸುತ್ತ ಶಶಾಂಕನಿಗೆ ಅರ್ಘ್ಯವನ್ನು ಕೊಡಬೇಕು. ಅರ್ಘ್ಯಕೊಡುವಾಗ ಹೇಳಬೇಕಾದ ಮಂತ್ರವೆಂದರೆ - ಕ್ಷೀರಸಾಗರದಲ್ಲಿ ಹುಟ್ಟಿದ, ಅತ್ರಿಗೋತ್ರ ಸಮುದ್ಭೂತನಾದ, ರೋಹಿಣೀಪತಿಯಾದ ಚಂದ್ರನೇ! ನಿನಗೆ ನಮಸ್ಕರಿಸುತ್ತೇನೆ. ನಾನು

ದೇವಕ್ಯಾ ವಸುದೇವಂ ಚ ನಂದಂ ಚೈವ ಯಶೋದಯಾ ।
ರೋಹಿಣ್ಯಾ ಚ ಸುಧಾರಶ್ಮಿಂ ಬಲಂ ಚ ಹರಿಣಾ ಸಹ ॥ ೨೩॥

ಸಂಪೂಜ್ಯ ವಿಧಿವದ್ದೇಹೀ ಕಿಂ ನಾಪ್ನೋತಿ ಸುದುರ್ಲಭಮ್ ।
ಏಕಾದಶೀ ಕೋಟಿಸಂಖ್ಯಾ ತುಲ್ಯಾ ಕೃಷ್ಣಾಷ್ಟಮೀ ತಥಾ ॥ ೨೪॥

ಏವಂ ಸಂಪೂಜ್ಯ ತದ್ರಾತ್ರೌ ಪ್ರಭಾತೇ ನವಮೀದಿನೇ ।
ಯಥಾ ಹರೇಸ್ತಥಾ ಕಾರ್ಯೋ ಭಗವತ್ಯಾ ಮಹೋತ್ಸವಃ ॥ ೨೫॥

ಬ್ರಾಹ್ಮಣಾನ್ಭೋಜಯೇದ್ ಭಕ್ತ್ಯಾ ದದ್ಯಾದ್ವೈ ಗೋಧನಾದಿಕಮ್ ।
ಯದ್ಯದಿಷ್ಟತಮಂ ತತ್ರ ಕೃಷ್ಣೋ ಮೇ ಪ್ರೀಯತಾಮಿತಿ ॥ ೨೬॥

ನಮಸ್ತೇ ವಾಸುದೇವಾಯ ಗೋಬ್ರಾಹ್ಮಣಹಿತಾಯ ಚ ।
ಶಾಂತಿರಸ್ತು ಶಿವಂ ಚಾಸ್ತು ಇತ್ಯುಕ್ತ್ವಾ ತಂ ವಿಸರ್ಜಯೇತ್ ॥ ೨೭॥

ತತೋ ಬಂಧುಜನೈಃ ಸಾರ್ಧಂ ಸ್ವಯಂ ಭುಂಜೀತ ವಾಗ್ಯತಃ ।
ಏವಂ ಯಃ ಕುರುತೇ ದೇವ್ಯಾಃ ಕೃಷ್ಣಸ್ಯ ಚ ಮಹೋತ್ಸವಮ್ ॥ ೨೮॥

---

ಕೊಟ್ಟ ಅರ್ಘ್ಯವನ್ನು ಸ್ವೀಕರಿಸು. ॥ ೨೨॥ ದೇವಕೀ ಸಹಿತನಾದ ವಸುದೇವನನ್ನು, ಯಶೋದಾಸಹಿತನಾದ ನಂದನನ್ನು, ರೋಹಿಣೀ ಸಹಿತನಾದ ಚಂದ್ರನನ್ನು, ಹರಿಯಿಂದ ಸಹಿತನಾದ ಬಲಭದ್ರನನ್ನು ॥ ೨೩॥ ವಿಧಿಪೂರ್ವಕ ಪೂಜಿಸಿದರೆ ಯಾವ ಮನುಷ್ಯನು ತಾನೆ ದುರ್ಲಭವಾದ ವಸ್ತುವನ್ನು ಹೊಂದದಿದ್ದಾನು? ಒಂದು ಕೃಷ್ಣಾಷ್ಟಮಿಯು ಒಂದು ಕೋಟಿ ಸಂಖ್ಯಾ ಏಕಾದಶಿಗಳಿಗೆ ಸಮಾನವಾಗಿರುತ್ತದೆ. ॥ ೨೪॥ ಈ ಪ್ರಕಾರ ಕೃಷ್ಣಾಷ್ಟಮಿಯ ರಾತ್ರಿ ಪೂಜಿಸಿ ನವಮೀ ದಿನ ಪ್ರಾತಃಕಾಲದಲ್ಲಿ ಶ್ರೀಹರಿಯ ಉತ್ಸವದಂತೆ ಭಗವತಿಯ ಉತ್ಸವವನ್ನೂ ಭಕ್ತಿಯಿಂದ ಮತ್ತು ವೈಭವದಿಂದ ಆಚರಿಸಬೇಕು. ॥ ೨೫॥ ಭಕ್ತಿಯಿಂದ ಬ್ರಾಹ್ಮಣ ಭೋಜನ ಮಾಡಿಸಬೇಕು. ಅವರಿಗೆ ಗೋವು, ಧನ ಮೊದಲಾದವುಗಳನ್ನು ಮತ್ತು ಅವರಿಗೆ ಪ್ರಿಯವಾದುದನ್ನು ಶ್ರೀಕೃಷ್ಣನ ಅನುಗ್ರಹವಾಗುವದಕ್ಕಾಗಿ ದಾನವಾಗಿ ಕೊಡಬೇಕು. ॥ ೨೬॥ '' ಗೋ ಬ್ರಾಹ್ಮಣರಿಗೆ ಹಿತವನ್ನುಂಟು ಮಾಡುವ, ವಾಸುದೇವನಿಗೆ ನಮಸ್ಕರಿಸುತ್ತೇನೆ. ಶಾಂತಿಯಾಗಲಿ ಮತ್ತು ಮಂಗಳವಾಗಲಿ '' ಎಂದು ಹೇಳುತ್ತ ವಿಸರ್ಜಿಸಬೇಕು. ॥ ೨೭॥ ನಂತರ ತನ್ನ ಬಂಧುಗಳಿಂದ ಕೂಡಿಕೊಂಡು ತಾನು ಮೌನದಿಂದ ಇದ್ದು ಊಟಮಾಡಬೇಕು. ಈ ಪ್ರಕಾರ ಯಾವನು ದೇವಕೀದೇವಿಯ ಮತ್ತು ಶ್ರೀಕೃಷ್ಣನ ಜನ್ಮಮಹೋತ್ಸವವನ್ನು ॥ ೨೮॥ ಪ್ರತಿ ವರ್ಷ ವಿಧಾನದಿಂದ ಯಥೋಕ್ತವಾಗಿ ಆಚರಿಸುವನೋ ಅವನಿಗೆ ಶುಭ ಫಲವು

ಪ್ರತಿವರ್ಷಂ ವಿಧಾನೇನ ಯಥೋಕ್ತಂ ಲಭತೇ ಫಲಮ್ ।
ಪುತ್ರಸಂತಾನಮಾರೋಗ್ಯಂ ಸೌಭಾಗ್ಯಮತುಲಂ ಭವೇತ್ ॥ ೨೯॥

ಇಹ ಧರ್ಮಮತಿರ್ಭೂತ್ವಾ ಅಂತೇ ವೈಕುಂಠಮಾಪ್ನುಯಾತ್ ।
ಉದ್ಯಾಪನಮಥೋ ವಕ್ಷ್ಯೇ ಪುಣ್ಯೇಽಹ್ನಿ ವಿಧಿಪೂರ್ವಕಮ್ ॥ ೩೦॥

ಪೂರ್ವೇದ್ಯುರೇಕಭಕ್ತಾಶೀ ಸ್ವಪೇದ್ವಿಷ್ಣುಂ ಸ್ಮರನ್ ಹೃದಿ ।
ಪ್ರಾತಃ ಸಂಧ್ಯಾದಿ ಸಂಪಾದ್ಯ ಬ್ರಾಹ್ಮಣೈಃ ಸ್ವಸ್ತಿವಾಚಯೇತ್ ॥ ೩೧॥

ಆಚಾರ್ಯಂ ವರಯಿತ್ವಾ ತು ಋತ್ವಿಜಾಂಶ್ಚೈವ ಪೂಜಯೇತ್ ।
ಪಲೇನ ವ ತದರ್ಧೇನ ತದರ್ಧಾರ್ಧೇನ ವಾ ಪುನಃ ॥ ೩೨॥

ಪ್ರತಿಮಾಂ ಕಾರಯೇತ್ಪಶ್ಚಾದ್ ವಿತ್ತಶಾಠ್ಯವಿವರ್ಜಿತಃ ।
ಮಂಡಪೇ ಮಂಡಲೇ ದೇವಾನ್ ಬ್ರಹ್ಮಾದ್ಯಾನ್ ಸ್ಥಾಪಯೇದ್ಬುಧಃ ॥ ೩೩॥

ತತ್ರ ಸಂಸ್ಥಾಪಯೇತ್ಕುಂಭಂ ತಾಮ್ರಂ ಮೃನ್ಮಯಮೇವ ವಾ ।
ತಸ್ಯೋಪರಿ ನ್ಯಸೇತ್ಪಾತ್ರಂ ರಾಜತಂ ವೈಣವಂ ತು ವಾ ॥ ೩೪॥

ವಾಸಸಾಽಽಚ್ಛಾದ್ಯ ಗೋವಿಂದಂ ತತ್ರ ಸಂಪೂಜಯೇದ್ಬುಧಃ ।
ಉಪಚಾರೈಃ ಷೋಡಶಭಿರ್ಮಂತ್ರೈರ್ವೈದಿಕತಾಂತ್ರಿಕೈಃ ॥ ೩೫॥

---

ಲಭಿಸುವದು. ಪುತ್ರಸಂತಾನ, ಆರೋಗ್ಯ ಮತ್ತು ಅತುಲವಾದ ಸೌಭಾಗ್ಯದ ಪ್ರಾಪ್ತಿಯಾಗುವದು. ॥ ೨೯॥ ಇಹದಲ್ಲಿರುವಾಗ ಧರ್ಮದಲ್ಲಿ ಬುದ್ಧಿಯು, ಕೊನೆಗೆ ವೈಕುಂಠಲೋಕಪ್ರಾಪ್ತಿಯಾಗುವದು. ಪುಣ್ಯದಿನದಲ್ಲಿ ವಿಧಿಪೂರ್ವಕ ಉದ್ಯಾಪನೆಯನ್ನು ಮಾಡಬೇಕು. ಹೇ ಕುಮಾರಾ! ಉದ್ಯಾಪನೆಯ ಕ್ರಮವನ್ನು ತಿಳಿಸುವೆನು ಕೇಳು. ॥ ೩೦॥ ಸಪ್ತಮಿಯ ದಿನ ಒಪ್ಪತ್ತು ಊಟ ಮಾಡಿ ವಿಷ್ಣುವನ್ನು ಸ್ಮರಿಸುತ್ತ ರಾತ್ರಿ ಮಲಗಬೇಕು. ಮರುದಿನ ಬೆಳಿಗ್ಗೆ ಸ್ನಾನವನ್ನು ಮುಗಿಸಿ ಪ್ರಾತಃಸಂಧ್ಯಾದಿ ನಿತ್ಯ ಕರ್ಮಗಳನ್ನು ಮಾಡಬೇಕು. ನಂತರ ಬ್ರಾಹ್ಮಣರಿಂದ ಆಶೀರ್ವಾದವನ್ನು ಪಡೆದು ॥ ೩೧॥ ತನ್ನ ಕುಲಪುರೋಹಿತರನ್ನು ಆಚಾರ್ಯಸ್ಥಾನದಲ್ಲಿ ಕೂಡಿಸಿ, ಇತರ ಋತ್ವಿಜರೊಂದಿಗೆ ಎಲ್ಲರನ್ನು ಪೂಜಿಸಬೇಕು. ವಿತ್ತ ಶಾಠ್ಯವಿಲ್ಲದವನಾಗಿ ಒಂದು ಪಲ ಅಥವಾ ಅರ್ಧಪಲ ಅಥವಾ ೧/೪ ಪಲ ತೂಕದ ಬಂಗಾರದಲ್ಲಿ ॥ ೩೨॥ ಶ್ರೀಕೃಷ್ಣನ ಪ್ರತಿಮೆಯನ್ನು ಮಾಡಿಸಿ ಅಲಂಕೃತವಾದ ಮಂಡಪದಲ್ಲಿ ಇತರ ದೇವತೆಗಳೊಂದಿಗೆ ಸ್ಥಾಪಿಸಬೇಕು. ॥ ೩೩॥ ಅಲ್ಲಿ ತಾಮ್ರದ ಅಥವಾ ಮೃತ್ತಿಕೆಯ ಕುಂಭವನ್ನು ಪ್ರತಿಷ್ಠಾಪಿಸಿ ಅದರ ಮೇಲೆ ಬೆಳ್ಳಿಯ ಅಥವಾ ಕಟ್ಟಿಗೆಯ ಪಾತ್ರೆ ಅಥವಾ ಮಣೆಯನ್ನಿಡಬೇಕು. ॥ ೩೪॥ ಅದರ ಮೇಲೆ ಪ್ರತಿಮೆಯನ್ನಿಟ್ಟು ಅದನ್ನು ವಸ್ತ್ರದಿಂದ

ತತೋಽರ್ಘ್ಯಂ ಹರಯೇ ದದ್ಯಾದ್ದೇವಕೀಸಹಿತಾಯ ಚ ।
ಶಂಖೇ ಕೃತ್ವಾ ಜಲಂ ಶುದ್ಧಂ ಸಪುಷ್ಪಫಲಚಂದನಮ್ ॥ ೩೬॥

ಜಾನುಭ್ಯಾಮವನೀಂ ಗತ್ವಾ ನಾರಿಕೇಲಫಲಾನ್ವಿತಮ್ ।
ಜಾತಃ ಕಂಸವಧಾರ್ಥಾಯ ಭೂಭಾರೋತ್ತಾರಣಾಯ ಚ ॥ ೩೭॥

ಕೌರವಾಣಾಂ ವಿನಾಶಾಯ ದೈತ್ಯಾನಾಂ ನಿಧನಾಯ ಚ ।
ಗೃಹಾಣಾರ್ಘ್ಯಂ ಮಯಾ ದತ್ತಂ ದೇವಕ್ಯಾ ಸಹಿತೋ ಹರೇ ॥ ೩೮॥

ಚಂದ್ರಾಯಾರ್ಘ್ಯಂ ತತೋ ದದ್ಯಾತ್ಪೂರ್ವೋಕ್ತವಿಧಿನಾ ಸುಧೀಃ ॥ ೩೯॥

ನಮಸ್ತುಭ್ಯಂ ಜಗನ್ನಾಥ ದೇವಕೀತನಯ ಪ್ರಭೋ ।
ವಸುದೇವಾತ್ಮಜಾನಂತ ತ್ರಾಹಿ ಮಾಂ ಭವಸಾಗರಾತ್ ॥ ೪೦॥

ಇತ್ಥಂ ಸಂಪ್ರಾರ್ಥ್ಯ ದೇವೇಶಂ ರಾತ್ರೌ ಜಾಗರಣಂ ಚರೇತ್ ।
ಪ್ರತ್ಯೂಷೇ ವಿಮಲೇ ಸ್ನಾತ್ವಾ ಪೂಜಯಿತ್ವಾ ಜನಾರ್ದನಮ್ ॥ ೪೧॥

ಪಾಯಸೇನ ತಿಲಾಜ್ಯೈಶ್ಚ ಮೂಲಮಂತ್ರೇಣ ಭಕ್ತಿತಃ ।
ಅಷ್ಟೋತ್ತರಶತಂ ಹುತ್ವಾ ತತಃ ಪುರುಷಸೂಕ್ತತಃ ॥ ೪೨॥

---

ಆಚ್ಛಾದಿಸಿ ಭಕ್ತಿಯಿಂದ ಷೋಡಶೋಪಚಾರಗಳಿಂದ ವೈದಿಕ ಹಾಗೂ ತಾಂತ್ರಿಕ ಮಂತ್ರ ಪಠಣಪೂರ್ವಕ ಪೂಜಿಸಬೇಕು. ॥ ೩೫॥ ನಂತರ ದೇವಕೀ ಸಹಿತನಾದ ಶ್ರೀಹರಿಗೆ ಶುದ್ಧವಾದ ಜಲವನ್ನು ಶಂಖದಲ್ಲಿ ಹಾಕಿ ಪುಷ್ಪ, ಫಲ, ಚಂದನಗಳೊಂದಿಗೆ ಅರ್ಘ್ಯವನ್ನು ಕೊಡಬೇಕು. ॥ ೩೬॥ ಅರ್ಘ್ಯವನ್ನು ಕೊಡುವಾಗ ನೆಲದ ಮೇಲೆ ಮೊಳಕಾಲುಗಳನ್ನು ಊರಿ ಟೆಂಗಿನಕಾಯಿ ಸಮರ್ಪಣೆಯೊಂದಿಗೆ - ಹೇ ಶ್ರೀಹರೇ ! ಕಂಸನ ವಧೆ ಮಾಡುವದಕ್ಕಾಗಿ ಮತ್ತು ಭೂಭಾರವನ್ನು ಕಡಿಮೆ ಮಾಡುವದಕ್ಕಾಗಿ ॥ ೩೭॥ ಕೌರವರ ವಿನಾಶಕ್ಕಾಗಿ ಮತ್ತು ದೈತ್ಯರ ಸಂಹಾರ ಮಾಡುವದಕ್ಕಾಗಿ ಈ ಭೂಮಿಯ ಮೇಲೆ ಅವತಾರ ಮಾಡಿರುವಿ. ದೇವಕಿ ದೇವಿಯಿಂದ ಸಹಿತನಾದ ಅಂಥ ನೀನು ನಾನು ಕೊಡುತ್ತಿರುವ ಈ ಅರ್ಘ್ಯವನ್ನು ಸ್ವೀಕರಿಸು. ॥ ೩೮॥ ತಿಳಿದವನು ನಂತರ ಈ ಮೊದಲು ತಿಳಿಸಿದ ಕ್ರಮದಂತೆ ಚಂದ್ರನಿಗೆ ಅರ್ಘ್ಯವನ್ನು ಕೊಡಬೇಕು. ॥ ೩೯॥ ಹೇ ಜಗನ್ನಾಥಾ!, ದೇವಕೀಪುತ್ರ, ಪ್ರಭೋ, ವಸುದೇವಾತ್ಮಜ, ಅನಂತ ! ನನ್ನನ್ನು ಈ ಭವಸಾಗರದಿಂದ ಉದ್ಧರಿಸು. ॥ ೪೦॥ ಈ ಪ್ರಕಾರ ದೇವೇಶನನ್ನು ಪ್ರಾರ್ಥಿಸಿ ರಾತ್ರಿ ಜಾಗರಣವನ್ನು ಮಾಡಬೇಕು. ಮರುದಿನ ಬೆಳಿಗ್ಗೆ ಶುದ್ಧವಾದ ಜಲದಲ್ಲಿ ಸ್ನಾನಮಾಡಿ ಜನಾರ್ದನನನ್ನು ಪೂಜಿಸಬೇಕು. ॥ ೪೧॥ ಅನಂತರ ಮೂಲಮಂತ್ರ, ಪುರುಷಸೂಕ್ತ ಪಠಣ ಪೂರ್ವಕ

ಮಂತ್ರೇಣೇದಂ ವಿಷ್ಣುರಿತಿ ಜುಹುಯಾದ್ವೈ ಘೃತಾಹುತೀಃ ।
ಹೋಮಶೇಷಂ ಸಮಾಪ್ಯಾಥ ಪೂರ್ಣಾಹುತಿಪುರಃಸರಮ್ ॥ ೪೩॥

ಆಚಾರ್ಯಂ ಪೂಜಯೇತ್ಪಶ್ಚಾತ್ ಭೂಷಣಾಚ್ಛಾದನಾದಿಭಿಃ ।
ಗಾಮೇಕಾಂ ಕಪಿಲಾಂ ದದ್ಯಾತ್ ವ್ರತಸಂಪೂರ್ತಿಹೇತವೇ ॥ ೪೪॥

ಪಯಸ್ವಿನೀಂ ಸುಶೀಲಾಂ ಚ ಸವತ್ಸಾಂ ಸಗುಣಾಂ ತಥಾ ।
ಸ್ವರ್ಣಶೃಂಗೀಂ ರೌಪ್ಯಖುರಾಂ ಕಾಂಸ್ಯದೋಹನಿಕಾಯುತಾಮ್ ॥ ೪೫॥

ಮುಕ್ತಾಪುಚ್ಛಾಂ ತಾಮ್ರಪೃಷ್ಠೀಂ ಸ್ವರ್ಣಘಂಟಾಸಮನ್ವಿತಾಮ್ ।
ವಸ್ತ್ರಛನ್ನಾಂ ದಕ್ಷಿಣಾಢ್ಯಾಮೇವಂ ಸಂಪೂರ್ಣತಾಮಿಯಾತ್ ॥ ೪೬॥

ಕಪಿಲಾಯಾ ಅಭಾವೇಽಪಿ ಗೌರನ್ಯಾಪಿ ಪ್ರದೀಯತೆ ।
ತತಃ ಪ್ರದದ್ಯಾದ್ ಋತ್ವಿಗ್ಭ್ಯೋ ದಕ್ಷಿಣಾಂ ಚ ಯಥಾರ್ಥತಃ ॥ ೪೭॥

ಬ್ರಾಹ್ಮಣಾನ್ ಭೋಜಯೇತ್ಪಶ್ಚಾದಷ್ಟೌ ತೇಭ್ಯಶ್ಚ ದಕ್ಷಿಣಾಮ್ ।
ಕಲಶಾನ್ ಜಲಸಂಪೂರ್ಣಾನ್ ದದ್ಯಾಚ್ಚೈವ ಸಮಾಹಿತಃ ॥ ೪೮॥

---

ಪಾಯಸ-ತಿಲ-ಘೃತಗಳಿಂದ ಭಕ್ತಿಪೂರ್ವಕ ೧೦೮ ಆಹುತಿಗಳನ್ನು ಹಾಕಿ ಹೋಮ ಮಾಡಬೇಕು. ॥೪೨॥ " ಇದಂ ವಿಷ್ಣುಂ " ಎಂಬ ಮಂತ್ರದಿಂದ ಆಜ್ಯದಿಂದ ಹೋಮ ಮಾಡಬೇಕು. ಪೂರ್ಣಾಹುತಿಯೊಂದಿಗೆ ಹೋಮಕಾರ್ಯವನ್ನು ಪೂರ್ತಿಗೊಳಿಸಿ ॥೪೩॥ ನಂತರ ಆಚಾರ್ಯಸ್ಥಾನದಲ್ಲಿದ್ದ ವಿಪ್ರನಿಗೆ ಅಲಂಕಾರ ವಸ್ತ್ರಾದಿಗಳನ್ನು ಕೊಟ್ಟು ಪೂಜಿಸಬೇಕು. ಕಪಿಲ ವರ್ಣದ, ಸುಸ್ವಭಾವದ ಹಾಗೂ ಹಾಲು ಕರೆಯುವ ಒಂದು ಸವತ್ಸ ಗೋವನ್ನು ವ್ರತ ಸಂಪೂರ್ತಿಗಾಗಿ ಆಚಾರ್ಯನಿಗೆ ಕೊಡಬೇಕು. ಅದರ ಕೋಡುಗಳನ್ನು ಬಂಗಾರದ ಕವಚದಿಂದ, ಖುರಗಳಿಗೆ ಬೆಳ್ಳಿಯ ಕವಚಗಳನ್ನು ಹಾಕಿ ಅಲಂಕರಿಸಬೇಕು. ಹಾಲು ಕರೆಯುವ ಕಂಚಿನ ಪಾತ್ರೆಯನ್ನು ಕೊಡಬೇಕು. ॥೪೪॥೪೫॥ ಗೋವಿನ ಪುಚ್ಛವನ್ನು ಮುತ್ತುಗಳಿಂದ ಅಲಂಕರಿಸಿ, ಬೆನ್ನ ಮೇಲೆ ತಾಮ್ರದ ಕವಚವನ್ನಿಟ್ಟು, ಬಂಗಾರದ ಘಂಟೆಯನ್ನು ಕಟ್ಟಿ, ರೇಶ್ಮೆ ವಸ್ತ್ರಗಳನ್ನು ಹೊದಿಸಿ, ಭೂರಿದಕ್ಷಿಣೆಯೊಂದಿಗೆ ದಾನ ಮಾಡಿದಾಗಲೇ ವ್ರತವು ಸಂಪೂರ್ಣವಾಗುವದು. ॥೪೬॥ ಕಪಿಲಾ ಆಕಳವು ಸಿಗದಿದ್ದರೆ ಕೆಂಪು ವರ್ಣದ ಬೇರೊಂದು ಆಕಳನ್ನು ಕೊಡಬಹುದು. ನಂತರ ಇತರ ಋತ್ವಿಜರಿಗೆ ಅವರವರ ಯೋಗ್ಯತಾನುಸಾರ ಮತ್ತು ತನ್ನ ಶಕ್ತ್ಯನುಸಾರ ಸಾಕಷ್ಟು ದಕ್ಷಿಣೆ, ಸಂಭಾವನೆಗಳನ್ನು ಕೊಡಬೇಕು. ॥೪೭॥ ಎಲ್ಲ ಮುಗಿದ ಮೇಲೆ ೮ ಜನ ಬ್ರಾಹ್ಮಣರಿಗೆ ಭೋಜನ ಮಾಡಿಸಿ ಅವರಿಗೆ ಜಲ ಪೂರ್ಣ ಕಲಶಗಳನ್ನು ಹಾಗೂ ಭೂರಿ ದಕ್ಷಿಣೆಯನ್ನು

ಪ್ರಾಪ್ಯಾನುಜ್ಞಾಂ ತಥಾ ತೇಭ್ಯೋ ಭುಂಜೀತ ಸಹ ಬಂಧುಭಿಃ ।
ಏವಂ ಕೃತೇ ಬ್ರಹ್ಮಪುತ್ರ ವ್ರತೋದ್ಯಾಪನಕರ್ಮಣಿ ॥ ೪೯॥

ನಿಷ್ಪಾಪಸ್ತತ್ಕ್ಷಣಾದೇವ ಜಾಯತೇ ವಿಬುಧೋತ್ತಮಃ ।
ಪುತ್ರಪೌತ್ರಸಮಾಯುಕ್ತೋ ಧನಧಾನ್ಯಸಮನ್ವಿತಃ ।
ಭುಕ್ತ್ವಾ ಭೋಗಾಂಶ್ಚಿರಂ ಕಾಲಮಂತೇ ವೈಕುಂಠಮಾಪ್ನುಯಾತ್ ॥ ೫೦॥

॥ ಇತಿ ಶ್ರೀಸ್ಕಂದಪುರಾಣೇ ಶ್ರಾವಣಮಾಸಮಾಹಾತ್ಮ್ಯೇ
ಈಶ್ವರ -ಸನತ್ಕುಮಾರಸಂವಾದೇ " ಕೃಷ್ಣಜನ್ಮಾಷ್ಟಮೀವ್ರತಕಥನಂ"
ನಾಮ ತ್ರಯೋವಿಂಶೋಽಧ್ಯಾಯಃ ॥

---

ಕೊಡಬೇಕು. ॥ ೪೮॥ ಅನಂತರ ಬ್ರಾಹ್ಮಣರಿಂದ ಅನುಜ್ಞೆಯನ್ನು ಪಡೆದು ತನ್ನೆಲ್ಲ ಬಂಧು-ಬಾಂಧವರಿಂದ ಕೂಡಿಕೊಂಡು ಊಟ ಮಾಡಬೇಕು. ಹೇ ಬ್ರಹ್ಮಪುತ್ರಾ! ಈ ವ್ರತೋದ್ಯಾಪನೆಯನ್ನು ಮಾಡುವವನು ॥ ೪೯॥ ಅದೇ ಕ್ಷಣದಲ್ಲಿ ಪಾಪಮುಕ್ತನಾಗಿ ಶ್ರೇಷ್ಠ ಜ್ಞಾನಿಯಾಗುತ್ತಾನೆ. ಮುಂದೆ ಪುತ್ರ ಪೌತ್ರರಿಂದ ಕೂಡಿ ಧನಧಾನ್ಯ ಸಂಪತ್ತುಗಳುಳ್ಳನಾಗುವನು. ಇಹದಲ್ಲಿ ಬಹುಕಾಲ ಭೋಗಗಳನ್ನು ಭೋಗಿಸಿ ಕೊನೆಗೆ ವೈಕುಂಠ ಲೋಕವನ್ನು ಪಡೆಯುವನು. ॥ ೫೦॥

॥ ಇಲ್ಲಿಗೆ ಶ್ರೀಸ್ಕಂದಪುರಾಣದಲ್ಲಿಯ ಶ್ರಾವಣಮಾಸ ಮಹಾತ್ಮೆಯಲ್ಲಿ ಈಶ್ವರ -ಸನತ್ಕುಮಾರ ಸಂವಾದದಲ್ಲಿ 'ಶ್ರೀಕೃಷ್ಣಜನ್ಮಾಷ್ಟಮೀ ವ್ರತಕಥನ ' ಎಂಬ ೨೩ನೆಯ ಅಧ್ಯಾಯವು ಸಮಾಪ್ತವಾಯಿತು. ॥

## ೨೪ನೆಯ ಅಧ್ಯಾಯ
# ಶ್ರೀಕೃಷ್ಣಜನ್ಮಾಷ್ಟಮೀ ವ್ರತ
(ಶ್ರಾವಣ ಕೃ. ೮)

*

ಈಶ್ವರ ಉವಾಚ -

ಪುರಾಕಲ್ಪೇ ಬ್ರಹ್ಮಪುತ್ರ ದೈತ್ಯಭಾರಪ್ರತಾಡಿತಾ ।
ಬ್ರಹ್ಮಾಣಂ ಶರಣಂ ಪ್ರಾಪ ಪೃಥ್ವೀ ದೀನಾತಿವಿಹ್ವಲಾ ॥ ೧॥

ವೃತ್ತಾಂತಂ ತನ್ಮುಖಾತ್ ಶ್ರುತ್ವಾ ಬ್ರಹ್ಮಾ ದೇವಗಣೈಃ ಸಹ ।
ಕ್ಷೀರಾರ್ಣವೇ ಹರಿಂ ಗತ್ವಾ ತುಷ್ಟಾವ ಸ್ತುತಿಭಿರ್ಬಹು ॥ ೨॥

ಪ್ರಾದುರಾಸೀತ್ತತೋ ದಿಕ್ಷು ಶ್ರುತ್ವಾ ಸರ್ವಂ ವಿಧೇರ್ಮುಖಾತ್ ।
ಮಾ ಭೈಷ್ಟ ದೇವಾ ದೇವಕ್ಯಾ ಜಠರೇ ವಸುದೇವತಃ ॥ ೩॥

ಅವತೀರ್ಣೋ ಭವಿಷ್ಯಾಮಿ ಹರಿಷ್ಯೇ ಭೂಮಿವೇದನಾಮ್ ।
ಭವಂತು ಯಾದವಾ ದೇವಾ ಇತ್ಯುಕ್ತ್ವಾಂತರ್ದಧೇ ವಿಭುಃ ॥ ೪॥

---

ಈಶ್ವರನು ಸನತ್ಕುಮಾರನಿಗೆ ಹೇಳುತ್ತಾನೆ - ಹೇ ಕುಮಾರಾ! ಪೂರ್ವಕಲ್ಪದಲ್ಲಿ ದೈತ್ಯರ ಭಾರದಿಂದ ಅತ್ಯಂತ ಪೀಡಿತಳಾದ ಪೃಥ್ವಿಯು ಅತಿ ದುಃಖಿತಳಾಗಿ ದೀನಳಾಗಿ ಚತುರ್ಮುಖ ಬ್ರಹ್ಮನಲ್ಲಿ ಶರಣು ಹೋದಳು. ॥ ೧॥ ಅವಳ ಮುಖದಿಂದ ಎಲ್ಲ ವಿಷಯಗಳನ್ನು ಅರಿತ ಬ್ರಹ್ಮನು ಎಲ್ಲ ದೇವತೆಗಳೊಂದಿಗೆ ಕೂಡಿಕೊಂಡು ಕ್ಷೀರಸಾಗರದಲ್ಲಿ ಪವಡಿಸಿದ ಶ್ರೀಹರಿಯ ಸನ್ನಿಧಿಗೆ ಹೋಗಿ ಬಹುಸ್ತೋತ್ರಗಳನ್ನು ಮಾಡಿ ಅವನನ್ನು ಸಂತೋಷಪಡಿಸಿದನು. ॥ ೨॥ ಆಗ ಅಲ್ಲಿ ವಿಷ್ಣುವು ಪ್ರಾದುರ್ಭೂತನಾಗಿ ಬ್ರಹ್ಮನಿಂದ ಭೂಲೋಕದ ವಿಷಯವನ್ನು ತಿಳಿದು- 'ಹೇ ಬ್ರಹ್ಮಾದಿ ದೇವತೆಗಳೇ! ಗಾಬರಿಯಾಗದಿರಿ. ಇನ್ನು ಸ್ವಲ್ಪ ಸಮಯದಲ್ಲಿ ವಸುದೇವನಿಂದ ದೇವಕಿಯ ಜಠರದಲ್ಲಿ ॥ ೩॥ ಭೂಮಿಯಲ್ಲಿ ಅವತರಿಸುವೆನು ಮತ್ತು ಭೂದೇವಿಯ ದುಃಖವನ್ನು ಇಲ್ಲದಂತೆ ಮಾಡುವೆನು. ಆಗ ನೀವೆಲ್ಲ ದೇವತೆಗಳು ಯಾದವರಾಗಿ ಅವತರಿಸಿರಿ'' ಎಂದು ಹೇಳಿ ವಿಭುವಾದ ಶ್ರೀಹರಿಯು ಅಲ್ಲಿಯೇ ಅಂತರ್ಧಾನ ಹೊಂದಿದನು. ॥ ೪॥ ಕಾಲಾಂತರದಲ್ಲಿ ದೇವಕಿಯ ಗರ್ಭದಿಂದ ಅವತರಿಸಿದ ಶ್ರೀಹರಿಯನ್ನು ಕಂಸನಿಂದ ಭೀತನಾದ ವಸುದೇವನು ಎತ್ತಿಕೊಂಡು ಗೋಕುಲಕ್ಕೆ ಹೋಗಿ ಅಲ್ಲಿ ಇಟ್ಟು ಬಂದನು.

ದೇವಕ್ಯಾ ಜಠರೇ ಜಾತೋ ವಸುದೇವೇನ ಗೋಕುಲೇ ।
ಸ್ಥಾಪಿತಂ ಕಂಸಭೀತೇನ ವವೃಧೇ ತತ್ರ ಕಂಸಹಾ ॥ ೫॥

ಆಗತ್ಯ ಮಥುರಾಂ ಪಶ್ಚಾತ್ಕಂಸಃ ಸಗಣಮಾಹನತ್ ।
ತತಃ ಸರ್ವೇ ಪೌರಜನಾಃ ಪ್ರಾರ್ಥಯಾಮಾಸುರಾದರಾತ್ ॥ ೬॥

ಕೃಷ್ಣ ಕೃಷ್ಣ ಮಹಾಯೋಗಿನ್ ಭಕ್ತಾನಾಮಭಯಪ್ರದ ।
ಪ್ರಾಣಘ್ನಾನ್ನಾಹಿ ನೋ ದೇವ ಶರಣಾಗತವತ್ಸಲ ॥ ೭॥

ಕಿಂಚಿದ್ವಿಜ್ಞಾಪಯೇ ದೇವ ಏತನ್ನೋ ವಕ್ತುಮರ್ಹಸಿ ।
ತವ ಜನ್ಮದಿನೇ ಕೃತ್ಯಂ ನ ಜ್ಞಾತಂ ಕೇನಚಿತ್ ಕ್ವಚಿತ್ ॥ ೮॥

ಜ್ಞಾತ್ವಾ ಚ ತದ್ದಿನೇ ಸರ್ವೇ ಕುರ್ಮೋ ವರ್ಧಾಪನೋತ್ಸವಮ್ ।
ತೇಷಾಂ ದೃಷ್ಟ್ವಾ ಚ ತಾಂ ಭಕ್ತಿಂ ಸ್ವಸ್ಮಿನ್ ಶ್ರದ್ಧಾಂ ಚ ಸೌಹೃದಮ್ ॥ ೯॥

ಕೃತ್ಯಂ ಜನ್ಮದಿನೇ ತೇಭ್ಯಃ ಕಥಯಾಮಾಸ ಕೇಶವಃ ।
ಶ್ರುತ್ವಾ ತೇಽಪಿ ತಥಾ ಚಕ್ರುರ್ವಿಧಾನಾತ್ತೇನ ತದ್‌ವ್ರತಮ್ ॥೧೦॥

ವರಾಂಶ್ಚ ಬಹುಧಾ ಪ್ರಾದಾದ್ ಭಗವಾನ್ ವ್ರತಕಾರಿಣೇ ।
ಅತ್ರೈವೋದಾಹರಂತೀಮಂ ಇತಿಹಾಸಂ ಪುರಾತನಮ್ ॥ ೧೧॥

---

ಕಂಸಾರಿಯು ಗೋಕುಲದಲ್ಲಿ ಬೆಳೆಯತೊಡಗಿದನು. ॥೫॥ ಮುಂದೆ ಕಂಸನು ಮಥುರೆಗೆ ಬಂದು ಅಲ್ಲಿನ ಬಾಲರನ್ನು ಕೊಂದು ಹಾಕಿದಾಗ ಪೌರಜನರೆಲ್ಲ ಶ್ರೀಕೃಷ್ಣನಿದ್ದಲ್ಲಿ ಬಂದು ಭಕ್ತಿಯಿಂದ ಪ್ರಾರ್ಥಿಸಿದರು – ' ಹೇ ಕೃಷ್ಣಾ, ಕೃಷ್ಣಾ , ಮಹಾಯೋಗಿನ್, ಭಕ್ತರಿಗೆ ಅಭಯಪ್ರದನೇ, ಹೇ ಶರಣಾಗತವತ್ಸಲಾ! ಹಂತಕನಾದ ಕಂಸನಿಂದ ನಮ್ಮನ್ನು ರಕ್ಷಿಸು. ॥೭॥ ಹೇ ದೇವಾ! ನಿನ್ನಲ್ಲಿ ಕೆಲವು ವಿಷಯಗಳನ್ನು ವಿಜ್ಞಾಪಿಸುತ್ತಿದ್ದೇವೆ. ಅದನ್ನು ನೀನು ನಮಗೆ ತಿಳಿಸುವವನಾಗು. ನಿನ್ನ ಜನ್ಮದಿನ ಮಾಡಬೇಕಾದ ಕೃತ್ಯವನ್ನು ಯಾರೂ ತಿಳಿದಿರುವದಿಲ್ಲ. ॥೮॥ ಜನ್ಮದಿನದ ಕೃತ್ಯವನ್ನು ತಿಳಿಸಿದರೆ ಅದನ್ನೆಲ್ಲ ಮಾಡಿ ನಾವು ನಿನ್ನ ವರ್ಧಾಪನೋತ್ಸವವನ್ನು ಆಚರಿಸುವೆವು.' ಪುರಜನರ ಭಕ್ತಿಯನ್ನು ಮತ್ತು ತನ್ನಲ್ಲಿರುವ ಅವರ ಶ್ರದ್ಧೆ ಸೌಹೃದಗಳನ್ನೂ ಅರಿತ ಶ್ರೀ ಕೃಷ್ಣನು ॥೯॥ ತನ್ನ ಜನ್ಮದಿನದ ಕೃತ್ಯವನ್ನೆಲ್ಲ ಅವರಿಗೆ ತಿಳಿಸಿದನು. ಅದನ್ನು ಕೇಳಿ ಪೌರರು ವಿಧಾನದಿಂದ ಕೃಷ್ಣಾಷ್ಟಮೀ ವ್ರತವನ್ನು ಆಚರಿಸಿದರು. ॥೧೦॥ ವ್ರತಮಾಡಿದ ಪ್ರತಿಯೊಬ್ಬನಿಗೂ ಶ್ರೀಹರಿಯು ವಿವಿಧ ವರಗಳನ್ನು ಕೊಟ್ಟನು. ಈ ವಿಷಯದಲ್ಲಿ ಒಂದು ಐತಿಹಾಸಿಕ ಸತ್ಯಕಥೆಯನ್ನು ಹೇಳುತ್ತಾರೆ, ಅದೇನೆಂದರೆ ॥ ೧೧॥ ಹಿಂದಕ್ಕೆ ಅಂಗದೇಶದಲ್ಲಿ ಮಿತಜಿತ್ ಎಂಬ ಹೆಸರಿನ ಒಬ್ಬ

ಅಂಗದೇಶೋದ್ಭವೋ ರಾಜಾ ಮಿತಜಿನ್ನಾಮ ನಾಮತಃ ।
ತಸ್ಯ ಪುತ್ರೋ ಮಹಾಸೇನಃ ಸತ್ಯಜಿತ್ಸತ್ಪಥೇ ಸ್ಥಿತಃ ॥ ೧೨॥

ಪಾಲಯಾಮಾಸ ಸರ್ವಜ್ಞೋ ವಿಧಿವದ್ರಂಜಯನ್ ಪ್ರಜಾಃ ।
ತಸ್ಯೈವಂ ವರ್ತಮಾನಸ್ಯ ಕದಾಚಿದ್ ದೈವಯೋಗತಃ ॥ ೧೩॥

ಪಾಖಂಡೈಃ ಸಹ ಸಂವಾಸೋ ಬಭೂವ ಬಹುವಾಸರಮ್ ।
ತತ್ಸಂಸರ್ಗಾತ್ಸ ನೃಪತಿರಧರ್ಮೇ ನಿರತೋಽಭವತ್ ॥ ೧೪॥

ವೇದಶಾಸ್ತ್ರಪುರಾಣಾನಿ ನಿನಿಂದ ಬಹುಶೋ ನೃಪಃ ।
ವರ್ಣಾಶ್ರಮಗತೇ ಧರ್ಮೇ ವಿದ್ವೇಷಂ ಪರಮಂ ಗತಃ ॥ ೧೫॥

ಏವಂ ಬಹುತಿಥೇ ಕಾಲೇ ಪ್ರಯಾತೇ ಮುನಿಸತ್ತಮ ।
ಕಾಲೇನ ನಿಧನಂ ಪ್ರಾಪ್ತೋ ಯಮದೂತವಶಂ ಗತಃ ॥ ೧೬॥

ಬಧ್ವಾ ಪಾಶೈರ್ನೀಯಮಾನೋ ಯಮದೂತೈರ್ಯಮಾಂತಿಕಮ್ ।
ಪೀಡಿತಸ್ತಾಡ್ಯಮಾನೋಽಸೌ ದುಷ್ಟಸಂಗತಿಯೋಗತಃ ॥ ೧೭॥

ನರಕೇ ಪಾತಿತಃ ಪ್ರಾಪ ಯಾತನಾಂ ಬಹುವತ್ಸರಮ್ ।
ಭುಕ್ತ್ವಾ ಪಾಪಸ್ಯ ಶೇಷೇಣ ಪೈಶಾಚೀಂ ಯೋನಿಮಾಸ್ಥಿತಃ ॥ ೧೮॥

---

ರಾಜನಿದ್ದನು. ಅವನಿಗೆ ಮಹಾಸೇನ ಎಂಬ ಹೆಸರಿನ ಒಬ್ಬ ಮಗನಿದ್ದನು. ಸದಾ ಸನ್ಮಾರ್ಗದಲ್ಲಿರುವ ಮಹಾಸೇನನು ಸತ್ಯದಿಂದಲೇ ಗೆಲ್ಲುತ್ತಿದ್ದನು. ॥ ೧೨॥ ಒಳ್ಳೆಯ ಜ್ಞಾನಿಯಾದ ಇವನು ರಾಜಧರ್ಮಕ್ಕನುಸಾರವಾಗಿ ರಾಜ್ಯಭಾರ ಮಾಡುತ್ತ ಎಲ್ಲ ಪ್ರಜೆಗಳು ಸುಖದಿಂದ ಇರುವಂತೆ ಪಾಲಿಸುತ್ತಿದ್ದನು. ಈ ರೀತಿ ಅವನು ಇರುತ್ತಿರುವಾಗ ಕೆಲಸಮಯದ ನಂತರ ದೈವಯೋಗದಿಂದ ಆ ರಾಜನಿಗೆ ॥ ೧೩॥ ಕೆಲ ಪಾಖಂಡಿಗಳೊಂದಿಗೆ ಬಹು ದಿನಗಳ ವರೆಗೆ ವಾಸ ಮಾಡುವ ಪ್ರಸಂಗವು ಒದಗಿತು. ಪಾಖಂಡಿಗಳ ಸಹವಾಸದಿಂದ ರಾಜನು ಅಧರ್ಮ ಕಾರ್ಯಗಳಲ್ಲಿ ರತನಾದನು. ॥೧೪॥ ವೇದಶಾಸ್ತ್ರ ಪುರಾಣಾದಿಗಳನ್ನು ಬಹುವಾಗಿ ನಿಂದಿಸತೊಡಗಿದನು. ವರ್ಣಾಶ್ರಮ ಧರ್ಮಗಳನ್ನು ಬಹು ದ್ವೇಷಿಸತೊಡಗಿದನು. ॥೧೫॥ ಹೇ ಕುಮಾರಾ! ಈ ರೀತಿ ಬಹು ಕಾಲವು ಗತಿಸಲು ರಾಜನು ಕಾಲವಶನಾಗಿ ಮೃತನಾದನು. ಅವನನ್ನು ಯಮದೂತರು ॥ ೧೬॥ ಪಾಶಗಳಿಂದ ಕಟ್ಟಿ ಯಮಧರ್ಮನಿದ್ದಲ್ಲಿ ಸೆಳೆದೊಯ್ದರು. ದುಷ್ಟರ ಸಹವಾಸ ಮಾಡಿದ್ದರಿಂದ ಯಮದೂತರು ಅವನನ್ನು ಚೆನ್ನಾಗಿ ಥಳಿಸಿ ಪೀಡಿಸಿದರು. ॥ ೧೭॥ ನರಕದಲ್ಲಿ ಒಗೆಯಲ್ಪಟ್ಟ ಅವನು ಬಹುವರ್ಷಗಳವರೆಗೆ ನರಕಯಾತನೆಯನ್ನು

ಕ್ಷುಧಾತೃಷ್ಣಾಸಮಾಕ್ರಾಂತೇ ಭ್ರಮನ್ಸ ಮರುಧನ್ವಸು ।
ಕಸ್ಯಚಿತ್ತ್ವಥ ವೈಶ್ಯಸ್ಯ ದೇಹಮಾವಿಶ್ಯ ಸಂಸ್ಥಿತಃ ॥ ೧೯॥

ಸಹ ತೇನೈವ ಸಂಯಾತೋ ಮಥುರಾಂ ಪುಣ್ಯದಾಂ ಪುರೀಮ್ ।
ಸಮೀಪೇ ರಕ್ಷಕೈಸ್ತಸ್ಯ ತಸ್ಮಾದ್ದೇಹಾದ್ಬಹಿಷ್ಕೃತಃ ॥ ೨೦॥

ಬಭ್ರಾಮ ವಿಪಿನೇ ಸೋಽಥ ಋಷೀಣಾಮಾಶ್ರಮೇಷು ಚ ।
ಕದಾಚಿದ್ದೈವಯೋಗೇನ ಹರೇರ್ಜನ್ಮಾಷ್ಟಮೀದಿನೇ ॥ ೨೧॥

ಕ್ರಿಯಮಾಣಾಂ ಮಹಾಪೂಜಾಂ ವ್ರತಿಭಿರ್ಮುನಿಭಿರ್ದ್ವಿಜೈಃ ।
ರಾತ್ರೌ ಜಾಗರಣಂ ಚೈವ ನಾಮಸಂಕೀರ್ತನಾದಿಭಿಃ ॥ ೨೨॥

ದದರ್ಶ ಸರ್ವಂ ವಿಧಿವತ್ ಶುಶ್ರಾವಾಥ ಹರೇಃ ಕಥಾಮ್ ।
ನಿಷ್ಪಾಪಸ್ತತ್ಕ್ಷಣಾದೇವ ಶುದ್ಧೋ ನಿರ್ಮಲಮಾನಸಃ ॥ ೨೩॥

ಪ್ರೇತದೇಹಂ ಸಮುತ್ಸೃಜ್ಯ ವಿಷ್ಣುಲೋಕೇ ವಿಮಾನಗಃ ।
ಯಮದೂತೈಃ ಪರಿತ್ಯಕ್ತೋ ದಿವ್ಯಭೋಗಸಮನ್ವಿತಃ ॥ ೨೪॥

---

ಅನುಭೋಗಿಸಿದ ನಂತರ ಪಾಪಶೇಷದಿಂದ ಪಿಶಾಚಿಯೋನಿಯಲ್ಲಿ ಹುಟ್ಟಿ ॥ ೧೮॥ ಹಸಿವೆ-ನೀರಡಿಕೆಗಳಿಂದ ಬಳಲಿ ಮರುಭೂಮಿಯಲ್ಲಿ ತಿರುಗುತ್ತಿರಲು ಒಬ್ಬ ವೈಶ್ಯನ ದೇಹವನ್ನು ಪ್ರವೇಶಿಸಿದನು. ॥ ೧೯॥ ಆ ವೈಶ್ಯನೊಂದಿಗೆ ಪುಣ್ಯಪ್ರದವಾದ ಮಥುರಾ ಪಟ್ಟಣಕ್ಕೆ ಬಂದನು. ಮಥುರಾ ಪುರಿಯ ಹತ್ತಿರವಿರುವಾಗ ಮಥುರೆಯ ರಕ್ಷಕರಿಂದ ಪಿಶಾಚಿಯಾಗಿದ್ದ ರಾಜನು ಹೊಡೆದೋಡಿಸಲ್ಪಡಲು ॥ ೨೦॥ ಅವನು ಅಲ್ಲಿಯೇ ಋಷಿಗಳ ಆಶ್ರಮಗಳಲ್ಲಿ ಹಾಗೂ ಅರಣ್ಯದಲ್ಲಿ ಸಂಚರಿಸತೊಡಗಿದನು. ಒಮ್ಮೆ ದೈವಯೋಗದಿಂದ ಅವನು ಶ್ರೀಕೃಷ್ಣಜನ್ಮಾಷ್ಟಮಿಯ ದಿನ ॥ ೨೧॥ ವ್ರತಿಗಳು, ಮುನಿಗಳು, ದ್ವಿಜರು ಮಾಡುತ್ತಿರುವ ಶ್ರೀಕೃಷ್ಣಪೂಜೆಯನ್ನು ಹಾಗೂ ರಾತ್ರಿ ನಾಮಸಂಕೀರ್ತನಾದಿಗಳಿಂದ ಮಾಡಿದ ಜಾಗರಣೆಯನ್ನು ॥ ೨೨॥ ಕಂಡನು. ಶ್ರೀಹರಿಯ ಕಥೆಯನ್ನು ಶ್ರವಣ ಮಾಡಿದನು. ಇದರಿಂದ ತಕ್ಷಣದಲ್ಲಿಯೇ ಪಾಪ ಮುಕ್ತನಾಗಿ ಶುದ್ಧನಾದನು, ಮನಸ್ಸು ನಿರ್ಮಲವಾಯಿತು. ॥ ೨೩॥ ಪ್ರೇತ ದೇಹವನ್ನು ತ್ಯಜಿಸಿ ದಿವ್ಯ ವಿಮಾನದಲ್ಲಿ ಕುಳಿತು ವಿಷ್ಣುಲೋಕಕ್ಕೆ ಹೊರಡಲು ಉದ್ಯುಕ್ತನಾದನು. ಯಮದೂತರು ಅವನ ಗೊಡವೆಯನ್ನು ಬಿಟ್ಟುಬಿಟ್ಟರು. ಮುಂದೆ ಅವನು ದಿವ್ಯಭೋಗಗಳಿಂದ ಯುಕ್ತನಾಗಿ ॥ ೨೪॥ ಈ ಕೃಷ್ಣಜನ್ಮಾಷ್ಟಮೀ ವ್ರತದ ಪ್ರಭಾವದಿಂದ ವಿಷ್ಣುವಿನ ಸನ್ನಿಧಿಯನ್ನು ಹೊಂದಿದನು. ನಿತ್ಯವಾಗಿರುವ ಈ ಸತ್ಯಕಥೆಯು ಪುರಾಣದಲ್ಲಿ

ವಿಷ್ಣುಸಾನ್ನಿಧ್ಯಮಾಪನ್ನೋ ವ್ರತಸ್ಯಾಸ್ಯ ಪ್ರಭಾವತಃ ।
ನಿತ್ಯಮೇತದ್ವ್ರತಂ ಚೈವ ಪುರಾಣೇ ಸಾರ್ವಲೌಕಿಕಮ್ ॥ ೨೫॥

ಕಥ್ಯತೇ ವಿಧಿವತ್ಸಮ್ಯಕ್ ಮುನಿಭಿಸ್ತತ್ತ್ವದರ್ಶಿಭಿಃ ।
ಸಾರ್ವಕಾಮಿಕಮೇವೈತತ್ ಕೃತ್ವಾ ಕಾಮಾನವಾಪ್ನುಯಾತ್ ॥ ೨೬॥

ಏವಂ ಯಃ ಕುರುತೇ ಕೃಷ್ಣಜನ್ಮಾಷ್ಟಮ್ಯಾಂ ವ್ರತಂ ಶುಭಮ್ ।
ಭುಕ್ತ್ವೇಹ ವಿವಿಧಾನ್ ಭೋಗಾನ್ಶುಭಾನ್ಕಾಮಾನವಾಪ್ನುಯಾತ್ ॥ ೨೭॥

ತತ್ರ, ದೇವವಿಮಾನೇನ ವರ್ಷಲಕ್ಷಂ ವಿಧೇಃ ಸುತಃ ।
ಭೋಗಾನ್ನಾನಾವಿಧಾನ್ ಭುಕ್ತ್ವಾ ಪುಣ್ಯಶೇಷಾದಿಹಾಗತಃ ॥ ೨೮॥

ಸರ್ವಕಾಮಸಮೃದ್ಧಸ್ತು ಸರ್ವಾಶುಭವಿವರ್ಜಿತಃ ।
ಕುಲೇ ನೃಪತಿವರ್ಯಾಣಾಂ ಜಾಯತೇ ಮದನೋಪಮಃ ॥ ೨೯॥

ಯಸ್ಮಿನ್ನದ್ಯೈವ ವಿಷಯೇ ಲಿಖಿತಂ ಸ್ಯಾತ್ಪರಾರ್ಪಿತಮ್ ।
ಕೃಷ್ಣಜನ್ಮೋಪಕರಣಂ ಸರ್ವಶೋಭಾಸಮನ್ವಿತಮ್ ॥ ೩೦॥

ಪೂಜ್ಯತೇ ವಿಶ್ವಸೃಟ್ ತತ್ರ, ವ್ರತೈರುತ್ಸವಸಂಯುತೈಃ ।
ಪರಚಕ್ರಭಯಂ ತತ್ರ, ನ ಕದಾಚಿದ್ಭವಿಷ್ಯತಿ ॥ ೩೧॥

---

ಸರ್ವತ್ರ ಪ್ರಸಿದ್ಧವಾಗಿದೆ. ॥ ೨೫॥ ತತ್ವದರ್ಶಿಗಳಾದ ಜ್ಞಾನಿಗಳು ಈ ಕಥೆಯನ್ನು ಸದಾಕಾಲ ಹೇಳುತ್ತಿರುತ್ತಾರೆ. ಸಕಲ ಕಾಮನೆಗಳನ್ನು ಕೊಡುವಂಥ ಈ ವ್ರತವನ್ನು ಆಚರಿಸಿ ಮನುಷ್ಯನು ತನ್ನ ಮನೋರಥಗಳನ್ನು ಪಡೆಯುವನು. ॥ ೨೬॥ ಈ ಪ್ರಕಾರ ಕೃಷ್ಣಾಷ್ಟಮಿಯ ದಿನ ಯಾವನು ಈ ಶುಭ ವ್ರತವನ್ನು ಆಚರಿಸುವನೋ ಅವನು ಇಹದಲ್ಲಿ ವಿವಿಧ ಭೋಗಗಳನ್ನು ಹೊಂದಿ ಶುಭ ಕಾಮಗಳನ್ನು ಪಡೆಯುವನು. ॥ ೨೭॥ ಹೇ ಕುಮಾರಾ! ನಂತರ ಅವನು ದೇವ ವಿಮಾನದಲ್ಲಿ ಕುಳಿತು ಸ್ವರ್ಗಲೋಕಕ್ಕೆ ಹೋಗುವನು. ಅಲ್ಲಿ ಒಂದು ಲಕ್ಷ ವರ್ಷಗಳವರೆಗೆ ವಿವಿಧ ದಿವ್ಯಭೋಗಗಳನ್ನುಂಡು ಪುಣ್ಯಶೇಷದಿಂದ ಭೂಲೋಕಕ್ಕೆ ಬರುವನು. ॥ ೨೮॥ ಇಲ್ಲಿ ಸರ್ವಕಾಮಗಳಿಂದ ಸಮೃದ್ಧನಾಗಿ ಯಾವ ಅಶುಭಗಳೂ ಇಲ್ಲದೇ ಶ್ರೇಷ್ಠರಾಜರ ವಂಶದಲ್ಲಿ ಜನಿಸುವನು. ಕಾಮನಂತೆ ಸುಂದರವಾದ ರೂಪವುಳ್ಳವನಾಗುವನು. ॥ ೨೯॥ ಯಾವನ ರಾಜ್ಯದಲ್ಲಿ ಸದಾ ಶುಭಕರವಾದ ಕೃಷ್ಣಾಷ್ಟಮೀ ವ್ರತದ ಬಗ್ಗೆ ಲೇಖನವಿರುವದೋ ಮತ್ತು ಬರೆದ ಲೇಖನವನ್ನು ಆಸ್ತಿಕರಿಗೆ ತಿಳಿಯಲೆಂದು ಕೊಡಲಾಗುವದೋ ॥ ೩೦॥ ಅಂಥವನ ರಾಜ್ಯದಲ್ಲಿ ವಿಶ್ವಸೃಷ್ಟಿಕರ್ತನು ಸದಾ ವ್ರತಗಳಿಂದಲೂ, ಉತ್ಸವಗಳಿಂದಲೂ ಪೂಜಿಸಲ್ಪಡುವನು. ಅವನಿಗೆ ಎಂದಿಗೂ

ಪರ್ಜನ್ಯಃ ಕಾಮವರ್ಷೀ ಸ್ಯಾದೀತಿಭ್ಯೋ ನ ಭಯಂ ಕ್ವಚಿತ್ ।
ಗೃಹೇ ವಾ ಪೂಜಯೇದ್ಯಸ್ತು ಚರಿತಂ ದೇವಕೀಜನೇಃ ॥ ೩೨॥

ತತ್ರ ಸರ್ವಸಮೃದ್ಧಂ ಸ್ಯಾನ್ನೋಪಸರ್ಗಾದ್ಭಯಂ ಭವೇತ್ ।
ಸಂಸರ್ಗೇಣಾಪಿ ಯೋ ಭಕ್ತ್ಯಾ ವ್ರತಂ ಪಶ್ಯೇದನಾಕುಲಃ ।
ಸೋऽಪಿ ಪಾಪವಿನಿರ್ಮುಕ್ತಃ ಪ್ರಯಾತಿ ಹರಿಮಂದಿರಮ್ ॥ ೩೩॥

॥ ಇತಿ ಶ್ರೀಸ್ಕಂದಪುರಾಣೇ ಶ್ರಾವಣಮಾಸಮಾಹಾತ್ಮ್ಯೇ
ಈಶ್ವರ -ಸನತ್ಕುಮಾರಸಂವಾದೇ ''ಕೃಷ್ಣಜನ್ಮಾಷ್ಟಮೀವ್ರತಕಥನಂ''
ನಾಮ ಚತುರ್ವಿಂಶೋऽಧ್ಯಾಯಃ ॥

---

ಪರರಿಂದ ಭಯವೆಂಬುದೇ ಇರಲಾರದು. ॥ ೩೧॥ ಆ ದೇಶದಲ್ಲಿ ಮಳೆಯು ಸದಾಕಾಲ ಸಕಾಲದಲ್ಲಿ ಆಗುವದು ಮತ್ತು ಯಾವ ಭಯವೂ ಇರಲಾರದು. ಯಾವನ ಮನೆಯಲ್ಲಿ ಶ್ರೀಕೃಷ್ಣನನ್ನು ಪೂಜಿಸಲಾಗುವದೋ ॥ ೩೨॥ ಅಲ್ಲಿ ಸರ್ವಸಮೃದ್ಧಿಯುಂಟಾಗುವದು ಮತ್ತು ಅಲ್ಲಿ ಭೂತ-ಪ್ರೇತಗಳ ಭಯವು ಇರಲಾರದು. ಸತ್ಸಂಗದಿಂದಲಾದರೂ ಯಾವುನಾದರೂ ಈ ವ್ರತವನ್ನು ನೋಡಿದರೆ ಅವನು ಪಾಪಮುಕ್ತನಾಗಿ ಹರಿಮಂದಿರಕ್ಕೆ ಹೋಗುವನು. ॥ ೩೩॥

॥ ಇಲ್ಲಿಗೆ ಶ್ರೀಸ್ಕಂದಪುರಾಣದಲ್ಲಿಯ ಶ್ರಾವಣಮಾಸ ಮಹಾತ್ಮೆಯಲ್ಲಿ ಈಶ್ವರ-ಸನತ್ಕುಮಾರ ಸಂವಾದದಲ್ಲಿ 'ಶ್ರೀಕೃಷ್ಣಜನ್ಮಾಷ್ಟಮೀವ್ರತ ಕಥನ' ಎಂಬ ೨೪ನೆಯ ಅಧ್ಯಾಯವು ಸಮಾಪ್ತವಾಯಿತು. ॥